# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1306
2. ಮಾನ್ಯ ಸದಸ್ಯರ ಹೆಸರು : ಶ್ರೀ ಗೋವಿಂದರಾಜು (ವಿಧಾನ ಸಭೆಯಿಂದ ಚುನಾಯಿತರಾದವರು)
3. ಉತ್ತರಿಸಬೇಕಾದ ದಿನಾಂಕ : 24/12/2021.
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಎ.ಪಿ.ಎಂ.ಸಿ ಕಾಯ್ದೆ ಬಂದ ನಂತರ ಸರ್ಕಾರಕ್ಕೆ ಯಾವ ವಿಧದಲ್ಲಿ ಅನುಕೂಲಕರ ಆದಾಯ ಬಂದಿದೆ; | ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 9(3) ರಡಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳನ್ನು ಸ್ಥಳೀಯ ಪ್ರಾಧಿಕಾರವೆಂದು ಪರಿಗಣಿಸಲಾಗಿದೆ. ರಾಜ್ಯ ಸರ್ಕಾರಕ್ಕೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಯಾವುದೇ ತೆರಿಗೆ ಅಥವಾ ಯಾವುದೇ ಶುಲ್ಕವನ್ನು ಪಾವತಿಸುವಂತಿಲ್ಲ.<br><br>ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರಡಿ ಕಾರ್ಯನಿರ್ವಹಿಸುವ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಕಾಯ್ದೆ ಸಂ:59/2020ರ ಮೂಲಕ ದಿ:31/12/2020 ರಲ್ಲಿ ಕೈಗೊಂಡು ತಿದ್ದುಪಡಿ ಪೂರ್ವದಲ್ಲಿ ಆಗಲಿ ತಿದ್ದುಪಡಿ ನಂತರದಲ್ಲಿ ಆಗಲಿ ಯಾವುದೇ ತೆರಿಗೆ/ಶುಲ್ಕವನ್ನು ಪಾವತಿಸಲು ಅವಕಾಶವಿರುವುದಿಲ್ಲ. ಹಾಗಾಗಿ ಇಲ್ಲಿ ರೈತರ ಅನುಕೂಲ ಮುಖ್ಯವೇ ವಿನಃ ಅನುಕೂಲಕರ ಆದಾಯವಲ್ಲ. |
| (ಆ) | ಬಂದಿದ್ದಲ್ಲಿ, ಇದುವರೆಗೂ ರಾಜ್ಯ ಸರ್ಕಾರದ ಬೊಕ್ಕಸಕ್ಕೆ ಎಷ್ಟು ಹಣ ಬಂದಿದೆ; | ಉದ್ಭವಿಸುವುದಿಲ್ಲ. |
| (ಇ) | ಕಾಯ್ದೆ ಅನುಷ್ಠಾನಗೊಂಡ ನಂತರ ರೈತರಿಗೆ ಅನುಕೂಲವಾಗುತ್ತಿದೆಯೇ; ಅಥವಾ ತೊಂದರೆಗಳಿವೆಯೇ ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 8(2) ಹಾಗೂ ಕಲಂ 117ಕ್ಕೆ ತಿದ್ದುಪಡಿ ಮಾಡಿ ಅಧಿಸೂಚಿತ ಕೃಷಿ ಉತ್ಪನ್ನಗಳನ್ನು ಎಪಿಎಂಸಿ ಪ್ರಾಂಗಣದಲ್ಲಿಯೇ ಮಾರಾಟ ಮಾಡಬೇಕೆಂಬ ನಿರ್ಬಂಧ ತೆರವುಗೊಳಿಸಲಾಗಿದೆ ಹಾಗೂ ಎಪಿಎಂಸಿ ಸಮಿತಿಗಳ ನಿಯಂತ್ರಣವನ್ನು ಪ್ರಾಂಗಣಕ್ಕೆ ಸೀಮಿತಗೊಳಿಸಿದೆ. ಕಲಂ 8(2)ರ ಉಲ್ಲಂಘನೆಗೆ ದಂಡ ಮತ್ತು ಸಜೆ ಶಿಕ್ಷೆಯನ್ನು ವಿಧಿಸುತ್ತಿದ್ದ ಕಲಂ 117ನ್ನು ಕೈಬಿಡಲಾಗಿದೆ.<br><br>ಸರ್ಕಾರವು ಕೈಗೊಂಡ ತಿದ್ದುಪಡಿ ನಂತರದಲ್ಲಿ ರಾಜ್ಯದಲ್ಲಿನ ರೈತರು ತಾವು ಬೆಳೆದ ಕೃಷಿ ಉತ್ಪನ್ನಗಳನ್ನು ಹಿಂದಿನಂತೆ ಪ್ರಾಂಗಣದಲ್ಲಿ, ಲೈಸೆನ್ಸ್ ಹೊಂದಿರುವ ನೇರ ಖರೀದಿ ಕೇಂದ್ರ, ರೈತ-ಗ್ರಾಹಕ ಮಾರುಕಟ್ಟೆ ಪ್ರಾಂಗಣ, ಖಾಸಗಿ ಮಾರುಕಟ್ಟೆ ಪ್ರಾಂಗಣಗಳಲ್ಲಿ ಅಥವಾ ತಮ್ಮ ಹೊಲದಲ್ಲೇ ತಮ್ಮ ಇಚ್ಛೆಯಂತೆ ಮಾರಾಟ ಮಾಡಲು ಹಾಗೂ ಹೆಚ್ಚಿನ ಧಾರಣೆ ಪಡೆಯಲು ಅವಕಾಶ ಲಭ್ಯವಾಗಿದೆ. ಇದರಿಂದ ರೈತರಿಗೆ ಅನುಕೂಲವಾಗುತ್ತದೆ.<br><br>ಪ್ರಸ್ತುತ ತಿದ್ದುಪಡಿ ನಂತರದ ಬೆಳವಣಿಗೆಯಲ್ಲಿ ರೈತರು ಅನಾನೂಕೂಲಕ್ಕೆ ಒಳಗಾಗಿರುವ ಕುರಿತು ಸರ್ಕಾರದ ಗಮನಕ್ಕೆ ಬಂದಿಲ್ಲ. |

<table>
<tr><td>(ಈ)</td><td>ಬಂದಿದ್ದಲ್ಲಿ, ಯಾವ ಕ್ರಮ ಕೈಗೊಳ್ಳಲಾಗಿದೆ;</td><td>ಉದ್ಭವಿಸುವುದಿಲ್ಲ</td></tr>
<tr><td>(ಉ)</td><td>ಎ.ಪಿ.ಎಂ.ಸಿ ಕಾಯ್ದೆ ಅನುಷ್ಠಾನದ ಮೊದಲು ಎಷ್ಟು ಆದಾಯ ಸರ್ಕಾರಕ್ಕೆ ಬರುತ್ತಿತ್ತು; (ವಿವರಗಳನ್ನು ನೀಡುವುದು)</td><td>ಮಾರುಕಟ್ಟೆ ಕಾಯ್ದೆ ಅನುಷ್ಠಾನದ ಮೊದಲು ರಾಜ್ಯದ ಎಪಿಎಂಸಿಗಳಿಂದ ಸರ್ಕಾರಕ್ಕೆ ಆದಾಯ ರೂಪದಲ್ಲಿ ಯಾವುದೇ ಹಣ ಬರುತ್ತಿರಲಿಲ್ಲ. ಬದಲಾಗಿ,<br><br>1) ಮಾರುಕಟ್ಟೆ ಸಮಿತಿಗಳಲ್ಲಿ ಕಾರ್ಯನಿರ್ವಹಿಸುವ ಅಧಿಕಾರಿ/ಸಿಬ್ಬಂದಿಗಳ ವೇತನ ಭತ್ಯೆ, ಇತರೆ ಭತ್ಯೆ, ಮಾರುಕಟ್ಟೆ ಸಮಿತಿಗಳ ಚುನಾವಣೆ ವೆಚ್ಚ ಮುಂತಾದ ಬಾಬ್ತುಗಳಿಗೆ ತಗಲುವ ವೆಚ್ಚವನ್ನು ಭರಿಸಲು ಮಾರುಕಟ್ಟೆ ಕಾಯ್ದೆ ಕಲಂ 91ರ ಮೇರೆಗೆ ಇಲಾಖಾ ನಿರ್ದೇಶಕರು ನಿಗದಿಪಡಿಸುವ ದರದಲ್ಲಿ ಮಾರುಕಟ್ಟೆ ಸಮಿತಿಗಳು ರಾಜ್ಯ ಸಂಚಿತ ನಿಧಿಗೆ ವಂತಿಗೆ ರೂಪದಲ್ಲಿ ಪಾವತಿಸಿರುತ್ತವೆ.<br><br>2) ಅಲ್ಲದೆ, ಕಾಯ್ದೆ ಕಲಂ 64-ಬಿ ರಡಿ ಮಾರುಕಟ್ಟೆ ಸಮಿತಿಗಳು ಸರ್ಕಾರವು ನಿಗದಿಪಡಿಸುವ ಮಾರುಕಟ್ಟೆ ಶುಲ್ಕದ ದರದ ಶೇಕಡವಾರು ವಂತಿಗೆಯನ್ನು ಸರ್ಕಾರವು ಸ್ಥಾಪಿಸಿರುವ ಆವರ್ತ ನಿಧಿಗೆ ಜಮೆ ಮಾಡುತ್ತಿರುತ್ತವೆ.<br><br>ಈ ಹಿಂದಿನ 3 ವರ್ಷಗಳಲ್ಲಿ ಈ ರೀತಿ ಪಾವತಿಸಿರುವ ವಿವರಗಳು ಈ ಕೆಳಕಂಡಂತ್ತಿದೆ.<br><br>
<table>
<tr><th>ವರ್ಷ</th><th>ರಾಜ್ಯ ಸಂಚಿತ ನಿಧಿಗೆ ಪಾವತಿಯಾದ ಮೊತ್ತ (ರೂ.ಲಕ್ಷಗಳಲ್ಲಿ)</th><th>ಆವರ್ತ ನಿಧಿಗೆ ಪಾವತಿಯಾದ ಮೊತ್ತ (ರೂ.ಲಕ್ಷಗಳಲ್ಲಿ)</th></tr>
<tr><td>2018-19</td><td>7700.74</td><td>13561.70</td></tr>
<tr><td>2019-20</td><td>6081.29</td><td>11000.44</td></tr>
<tr><td>2020-21</td><td>1571.50 (ದಿ:31/07/2020ರ ಅಂತ್ಯಕ್ಕೆ)</td><td>8835.40</td></tr>
</table>
</td></tr>
<tr><td>(ಊ)</td><td>ಕೃಷಿ ಉತ್ಪನ್ನಗಳನ್ನು ಸರಿಯಾದ ದರಕ್ಕೆ ರೈತರು ಮಾರಾಟ ಮಾಡಲು ಸಾಧ್ಯವಾಗುತ್ತಿಲ್ಲ ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ? (ವಿವರಗಳನ್ನು ನೀಡುವುದು)</td><td>ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 76 ರಡಿ ಗುರುತುಪಡಿಸಲಾದ ವಿಧಾನಗಳಾದ ಇ-ಟೆಂಡರ್ ಪದ್ಧತಿ, ಸಾರ್ವಜನಿಕ ಹರಾಜು ಅಥವಾ ಬಹಿರಂಗ ಒಪ್ಪಂದದ ರೀತಿಯಲ್ಲಿ ಕೃಷಿ ಉತ್ಪನ್ನಗಳ ಮಾರಾಟಕ್ಕೆ ಮಾರುಕಟ್ಟೆ ಪ್ರಾಂಗಣಗಳಲ್ಲಿ ಅವಕಾಶ ಇರುವುದರಿಂದ ರೈತರಿಗೆ ಸ್ಪರ್ಧಾತ್ಮಕ ಬೆಲೆ ದೊರಕಲು ಸಾಧ್ಯವಾಗುತ್ತಿದೆ. ಕೃಷಿ ಉತ್ಪನ್ನಗಳನ್ನು ಸರಿಯಾದ ದರಕ್ಕೆ ರೈತರು ಮಾರಾಟ ಮಾಡಲು ಸಾಧ್ಯವಾಗುತ್ತಿಲ್ಲ ಎಂಬುದು ಸರ್ಕಾರದ ಗಮನಕ್ಕೆ ಬಂದಿಲ್ಲ.</td></tr>
</table>

ಸಿಒ 336 ಎಂಆರ್‌ಇ 2021

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು